# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 602 |
| ಸದಸ್ಯರ ಹೆಸರು | : ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : 17-12-2021 |
| ಉತ್ತರಿಸುವ ಸಚಿವರು | : ಕೃಷಿ ಸಚಿವರು |

| ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಇತ್ತೀಚಿನ ದಿನಗಳಲ್ಲಿ ರೈತರಿಗೆ ಪೂರೈಕೆಯಾಗುತ್ತಿರುವ ರಸಗೊಬ್ಬರ, ಬಿತ್ತನೆ ಬೀಜ, ಕೀಟನಾಶಕಗಳು ಕಳಪೆ ಗುಣಮಟ್ಟದಿಂದ ಕೂಡಿದ್ದು, ಅನೇಕ ಬಾರಿ ಕಳಪೆ ಬಿತ್ತನೆ ಬೀಜದಿಂದಾಗಿ ರೈತರು ನಿರೀಕ್ಷಿತ ಫಸಲನ್ನು ಪಡೆಯದೆ ಬಾರಿ ನಷ್ಟ ಅನುಭವಿಸುತ್ತಿರುವ ಇಂತಹ ಸಂದರ್ಭದಲ್ಲಿ ಪೂರೈಕೆದಾರರು/ ವ್ಯಾಪಾರಸ್ಥರ ವಿರುದ್ಧ ಸರ್ಕಾರ ಕ್ರಮ ಕೈಗೊಂಡಿದೆಯೇ: (ಸಂಪೂರ್ಣ ಮಾಹಿತಿ ಒದಗಿಸುವುದು) | ಪ್ರಮಾಣಿತ ಬಿತ್ತನೆ ಬೀಜವನ್ನು ರೈತರಿಗೆ ವಿತರಿಸಲಾಗುತ್ತಿರುವುದರಿಂದ ಹಾಗೂ ಬೀಜ, ರಸಗೊಬ್ಬರ ಮತ್ತು ಕೀಟನಾಶಕಗಳ ಮಾದರಿಗಳನ್ನು ನಿಯಮಿತವಾಗಿ ಸಂಗ್ರಹಿಸಿ ಗುಣಮಟ್ಟವನ್ನು ಖಾತರಿಪಡಿಸಲು ವಿಶ್ಲೇಷಣೆಗೆ ಒಳಪಡಿಸಲಾಗುತ್ತಿದ್ದು, ವಿಶ್ಲೇಷಣೆಯಲ್ಲಿ ಕಡಿಮೆ ಗುಣಮಟ್ಟವೆಂದು ವರದಿಯಾದಲ್ಲಿ ಬಿತ್ತನೆ ಬೀಜ, ರಸಗೊಬ್ಬರ ಮತ್ತು ಪೀಡೆನಾಶಕ ಪೂರೈಕೆದಾರರು / ವ್ಯಾಪಾರಸ್ಥರ ಮೇಲೆ ಮೊಕದ್ದಮೆ ದಾಖಲಿಸಲಾಗುತ್ತಿದೆ.<br><br>ರೈತರಿಗೆ ಕಳಪೆ ಬಿತ್ತನೆ ಬೀಜ, ರಸಗೊಬ್ಬರ ಮತ್ತು ಕೀಟನಾಶಕಗಳು ಪೂರೈಕೆಯಾಗಿ ನಿರೀಕ್ಷಿತ ಫಸಲನ್ನು ಪಡೆಯದೇ ಭಾರಿ ನಷ್ಟ ಅನುಭವಿಸುತ್ತಿರುವ ಪ್ರಕರಣಗಳನ್ನು ತಡೆಯಲು ಮೇಲ್ಕಂಡಂತೆ ಕ್ರಮ ವಹಿಸಲಾಗುತ್ತಿದೆ. ಅದಾಗ್ಯೂ, ವಂಚನೆ ಸೇರಿದಂತೆ ನಷ್ಟವುಂಟಾದ ಪ್ರಕರಣಗಳಿದ್ದಲ್ಲಿ ರೈತರು ನೇರವಾಗಿ ಗ್ರಾಹಕರ ವೇದಿಕೆಗೆ ಹೋಗಲು ಅವಕಾಶವಿರುತ್ತದೆ. |
| ಆ | ಕಳಪೆ ರಸಗೊಬ್ಬರ, ಬಿತ್ತನೆ ಬೀಜಗಳ ಪೂರೈಕೆದಾರರು / ವ್ಯಾಪಾರಸ್ಥರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲು ಹಾಗೂ ರೈತರಿಗಾಗಿ ಬೆಳೆ ನಷ್ಟ ಭರಿಸಲು ಕಾನೂನಿನಲ್ಲಿ ಅವಕಾಶವಿದೆಯೇ; ಈ ಕುರಿತಂತೆ ಸರ್ಕಾರದ ನಿಲುವೇನೆ: (ಸಂಪೂರ್ಣ ಮಾಹಿತಿ ಒದಗಿಸುವುದು) | ಕಳಪೆ ರಸಗೊಬ್ಬರ, ಬಿತ್ತನೆ ಬೀಜಗಳ ಪೂರೈಕೆದಾರರು / ವ್ಯಾಪಾರಸ್ಥರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲು ಆಯಾ ಪರಿಕರಗಳ ಕಾಯ್ದೆ ಮತ್ತು ನಿಯಮಗಳನ್ವಯ ಅವಕಾಶವಿದ್ದು ಆದರೆ ರೈತರಿಗಾಗಿ ಬೆಳೆ ನಷ್ಟ ಭರಿಸಲು ಅವಕಾಶವಿರುವುದಿಲ್ಲ. ಆದರೆ ರೈತರೇ ನೇರವಾಗಿ ಗ್ರಾಹಕರ ವೇದಿಕೆಗೆ ಹೋಗಲು ಅವಕಾಶವಿರುತ್ತದೆ.<br><br>ಕಳಪೆ ರಸಗೊಬ್ಬರ ಮತ್ತು ಬಿತ್ತನೆ ಬೀಜಗಳ ಪೂರೈಕೆದಾರರು / ವ್ಯಾಪಾರಸ್ಥರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲು ಕೆಳಕಂಡಂತೆ ಕ್ರಮಗಳನ್ನು ವಹಿಸಲಾಗಿರುತ್ತದೆ.<br><br>ರೈತರುಗಳಿಗೆ ಉತ್ತಮ ಗುಣಮಟ್ಟದ ರಸಗೊಬ್ಬರ, ಬಿತ್ತನೆ ಬೀಜ ಮತ್ತು ಕೀಟನಾಶಕಗಳನ್ನು ಲಭ್ಯವಾಗುವ ನಿಟ್ಟಿನಲ್ಲಿ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತಿರುವ ಹಾಗೂ ದಾಸ್ತಾನಿರುವ ರಸಗೊಬ್ಬರ, ಬಿತ್ತನೆ ಬೀಜ ಮತ್ತು ಕೀಟನಾಶಕಗಳ ಗುಣಮಟ್ಟವನ್ನು ತಿಳಿಯಲು ಪ್ರತಿ ಜಿಲ್ಲೆಯಲ್ಲಿಯೂ ಸಹಾಯಕ ಕೃಷಿ ನಿರ್ದೇಶಕರ ನೇತೃತ್ವದಲ್ಲಿ ಜಾರಿದಳ ತಂಡಗಳನ್ನು ರಚಿಸಲಾಗಿದ್ದು, ತಂಡದ ಸದಸ್ಯರು ಮತ್ತು ರಾಜ್ಯದಲ್ಲಿ ಅಧಿಸೂಚಿಸಿರುವ ಪರಿವೀಕ್ಷಕರು ನಿಯಮಿತವಾಗಿ ಮಾರಾಟ ಮಳಿಗೆಗಳಿಗೆ ಬೇಟಿ ನೀಡಿ ತಪಾಸಣೆಯನ್ನು ಕೈಗೊಂಡು, ಮಾದರಿಗಳನ್ನು |

| | | |
|---|---|---|
| | | ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗುತ್ತಿದೆ. ವಿಶ್ಲೇಷಣೆಯಲ್ಲಿ ಕಳಪೆ ಎಂದು ಕಂಡುಬಂದಲ್ಲಿ ಅಂತಹ ಪರಿಕರಗಳು ರೈತರಿಗೆ ಒಳಕೆಯ ..ದಂತೆ ಕ್ರಮ ವಹಿಸಿ ಮಾರಾಟ ತಡೆಯಾಜ್ಞೆಯನ್ನು ನೀಡಿ ಬೀಜ ಕಾಯ್ದೆ, 1966, ರಸಗೊಬ್ಬರ ನಿಯಂತ್ರಣ ಆದೇಶ, 1985 ಮತ್ತು ಕೀಟನಾಶಕ ಕಾಯ್ದೆ, 1968 ರನ್ವಯ ಕಾನೂನು ಮತ್ತು ಆಡಳಿತಾತ್ಮಕ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |
| ಇ | ಕಳೆದ 3 ವರ್ಷದಲ್ಲಿ ಕಳಪೆ ರಸಗೊಬ್ಬರ, ಬಿತ್ತನೆ ಬೀಜ ಮತ್ತು ಕೀಟನಾಶಕಗಳಿಂದಾಗಿ ನಷ್ಟಗೊಳಗಾದ ರೈತರ ವಿವರ ನೀಡುವುದು ಹಾಗೂ ತಪ್ಪಿತಸ್ಥ ಕಳಪೆ ರಸಗೊಬ್ಬರ, ಬಿತ್ತನೆಬೀಜ ಮತ್ತು ಕೀಟನಾಶಕಗಳ ಪೂರೈಕೆದಾರರು / ವ್ಯಾಪಾರಸ್ಥರ ಮೇಲೆ ಕೈಗೊಂಡ ಕ್ರಮವೇನು? (ವಿವರ ನೀಡುವುದು) | 2018-19 ನೇ ಸಾಲಿನಿಂದ 2020-21ನೇ ಸಾಲಿನವರೆಗೆ ನಿಗದಿಪಡಿಸಿದ ಪ್ರಮಾಣಕ್ಕಿಂತ ಕಡಿಮೆ ಗುಣಮಟ್ಟವೆಂದು ವರದಿಯಾದ ಬಿತ್ತನೆ ಬೀಜ, ರಸಗೊಬ್ಬರ ಮತ್ತು ಪೀಡೆನಾಶಕಗಳ ಪೂರೈಕೆದಾರರು / ವ್ಯಾಪಾರಸ್ಥರ ಮೇಲೆ ದಾಖಲಾದ ಮೊಕದ್ದಮೆ ವಿವರಗಳು ಕೆಳಕಂಡಂತಿದೆ. |

| ವರ್ಷ | ದಾಖಲಾದ ಮೊಕದ್ದಮೆ (ಸಂಖ್ಯೆ) | | |
|---|---|---|---|
| | ಬಿತ್ತನೆ ಬೀಜ | ರಸಗೊಬ್ಬರ | ಪೀಡೆನಾಶಕ |
| 2018-19 | 41 | 45 | 13 |
| 2019-20 | 45 | 49 | 19 |
| 2020-21 | 180 | 23 | 14 |

ಮುಂದುವರೆದು, 2020-21 ಮತ್ತು 2021-22 ನೇ ಸಾಲಿನಲ್ಲಿ ಬೀಜ ಕಾಯ್ದೆ, 1966, ರಸಗೊಬ್ಬರ ನಿಯಂತ್ರಣ ಆದೇಶ, 1985 ಮತ್ತು ಕೀಟನಾಶಕ ಕಾಯ್ದೆ, 1968 ಮತ್ತು ನಿಯಮಗಳನ್ನು ಉಲ್ಲಂಘಿಸಿ ತಯಾರಿಕೆ, ದಾಸ್ತಾನು ಮತ್ತು ಮಾರಾಟ ಸಂಬಂಧ ಕೆಳಕಂಡಂತೆ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.

| ವಿವರ | ವರ್ಷ | ಬಿತ್ತನೆ ಬೀಜ (ಕ್ವಿಂ) | ರಸಗೊಬ್ಬರ (ಮೆ ಟನ್) | ಪೀಡೆನಾಶಕ (ಲೀ/ಕಿ.ಗ್ರಾಂ) |
|---|---|---|---|---|
| ಜಪ್ತಿ ಪ್ರಮಾಣ | 2020-21 | 8957 | 225.05 | 41572 |
| | 2021-22 | 1394 | 8851 | 14360 |
| ಮೌಲ್ಯ (ರೂ. ಲಕ್ಷ) | 2020-21 | 1471.31 | 46.61 | 213.92 |
| | 2021-22 | 416.78 | 166.72 | 86.13 |
| ದಾಖಲಾದ ಮೊಕದ್ದಮೆ ಸಂಖ್ಯೆ | 2020-21 | 17 | 20 | 10 |
| | 2021-22 | 21 | 64 | 45 |

**ಸಂಖ್ಯೆ: AGRI-AML/251/ 2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು